

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 259 |
| 2) | ಮಾನ್ಯ ಸದಸ್ಯರ ಹೆಸರು | ಶ್ರೀ ಡಾ: ತೇಜಸ್ವಿನಿ ಗೌಡ (ವಿಧಾನ ಸಭೆಯಿಯಿಂದ ಚುನಾಯಿತರಾದವರು) |
| 3) | ಉತ್ತರಿಸಬೇಕಾದ ದಿನಾಂಕ | 13-12-2021 |
| 4) | ಉತ್ತರಿಸುವವರು | ಮಾನ್ಯ ಉನ್ನತ ಶಿಕ್ಷಣ, ಐಟಿ/ಬಿಟಿ, ವಿಜ್ಞಾನ ಮತ್ತು ತಂತ್ರಜ್ಞಾನ, ವಿದ್ಯುನ್ಮಾನ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು. |

| ಪ್ರಶ್ನೆ | ಉತ್ತರ |
|---|---|
| (ಅ) ರಾಜ್ಯದಲ್ಲಿರುವ ಅವನತಿಯ ಅಂಚಿನಲ್ಲಿರುವ ಐತಿಹಾಸಿಕ ದೇವಸ್ಥಾನ, ಕೋಟೆ ಕೊತ್ತಲು, ಅರಮನೆ ಕಲ್ಯಾಣಿ ಪುಷ್ಕರಣಿ, ಮರಗೆಲಸದ ಕೆತ್ತನೆ ಮುಂತಾದ ಅತ್ಯಂತ Skilled ಶಿಲ್ಪಿ ಮತ್ತು ನಾಜೂಕಾದ ಕೌಶಲ್ಯಗಳನ್ನು ಉಳಿಸಿ, ಬಳಸಲು ಎಷ್ಟು ಜನರಿಗೆ ತರಬೇತಿ ನೀಡಲಾಗಿದೆ; | 2021-22 ನೇ ಸಾಲಿನಲ್ಲಿ ಕರ್ನಾಟಕ ಕೌಶಲ್ಯ ಅಭಿವೃದ್ಧಿ ನಿಗಮದ ವತಿಯಿಂದ ಅವನತಿ ಅಂಚಿನಲ್ಲಿರುವ ಐತಿಹಾಸಿಕ ಮರಗೆಲಸದ ಕೆತ್ತನೆ ಮುಂತಾದ ಅತ್ಯಂತ Skilled ಶಿಲ್ಪಿ ಮತ್ತು ನಾಜೂಕಾದ ಕೌಶಲ್ಯಗಳನ್ನು ಉಳಿಸಿ, ಬಳಸುವ ಸಂಬಂಧ ತರಬೇತಿ ನೀಡಲು ಕರ್ನಾಟಕ ವಿಶ್ವಕರ್ಮ ಅಭಿವೃದ್ಧಿ ನಿಗಮದೊಂದಿಗೆ ಈಗಾಗಲೇ ಒಡಂಬಡಿಕೆ ಮಾಡಿಕೊಂಡಿದ್ದು, ಅತಿ ಶೀಘ್ರದಲ್ಲೇ ತರಬೇತಿ ಕಾರ್ಯಕ್ರಮಗಳನ್ನು ಜಾರಿಗೊಳಿಸುವ ಗುರಿ ಹೊಂದಲಾಗಿದೆ. |
| (ಆ) ಇಂತಹ ಕೌಶಲ್ಯ ಪಡೆಯಲು ಯುವಜನರಲ್ಲಿ ಆಸಕ್ತಿ ಉತ್ಸಾಹ ಕಂಡಿದೆಯೆ; ಎಷ್ಟು ಜನ ತರಬೇತಿ ಪಡೆಯುತ್ತಿದ್ದಾರೆ. | ಕರ್ನಾಟಕ ವಿಶ್ವ ಕರ್ಮ ಅಭಿವೃದ್ಧಿ ನಿಗಮವು ತರಬೇತಿ ಕೇಂದ್ರವನ್ನು ಇತ್ತೀಚೆಗೆ ಕೌಶಲ್ಯಾಭಿವೃದ್ಧಿ ನಿಗಮದ ವೆಬ್ ಪೋರ್ಟಲ್ www.kaushalkar.com ನಲ್ಲಿ ನೋಂದಣಿಯಾಗಿ ಮಾನ್ಯತೆ ಪಡೆದಿರುವುದರಿಂದ ಪ್ರಸ್ತುತ ಕೌಶಲ್ಯ ತರಬೇತಿ ನೀಡುವ ಗುರಿಯನ್ನು ಸದರಿ ನಿಗಮದವರಿಗೆ ಹಂಚಿಕೆ ಮಾಡಲಾಗಿದೆ. ಅತೀ ಶೀಘ್ರದಲ್ಲಿಯೇ ತರಬೇತಿ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸುವಂತೆ ತಿಳಿಸಲಾಗಿದೆ. |
| (ಇ) ಶಿಲ್ಪಕಲೆಯಲ್ಲಿ ತರಬೇತಿ ಪಡೆದವರೆಷ್ಟು; ಎಷ್ಟು ಜನರಿಗೆ ಐತಿಹಾಸಿಕ ಪುರಾತತ್ವ-ಸ್ಮಾರಕ ಪುನರ್ ನಿರ್ಮಾಣ ದುರಸ್ಥಿ ಕಾರ್ಯಗಳಲ್ಲಿ ಉದ್ಯೋಗವಕಾಶ ನೀಡಲಾಗಿದೆ; | ಕರ್ನಾಟಕ ವಿಶ್ವ ಕರ್ಮ ಅಭಿವೃದ್ಧಿ ನಿಗಮದ ತರಬೇತಿ ಕೇಂದ್ರವು ತರಬೇತಿ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಿದ ನಂತರ ತರಬೇತಿ ಪಡೆದ ಅಭ್ಯರ್ಥಿಗಳಿಗೆ ಉದ್ಯೋಗ ಕಲ್ಪಿಸುವ ಗುರಿ ಹೊಂದಲಾಗಿದೆ. |
| (ಈ) ಅವರಿಗೆ ಆಸಕ್ತಿ ಬರಿಸಲು ಇರುವ ಉತ್ತೇಜನಕಾರಿ ಯೋಜನೆಗಳು ಯಾವುವು; | ಮುಖ್ಯಮಂತ್ರಿಗಳ ಕೌಶಲ್ಯ ಕರ್ನಾಟಕ ಯೋಜನೆಯಡಿ ಈ ಕಾರ್ಯಕ್ರಮವನ್ನು ಜಾರಿಗೊಳಿಸಿ, ಇನ್ನು ಹೆಚ್ಚಿನ ಅಭ್ಯರ್ಥಿಗಳಿಗೆ ಆಸಕ್ತಿ ಹೊಂದಲು ಹಾಗೂ ಉತ್ತೇಜನ ನೀಡಲು ಕ್ರಮವಹಿಸಲಾಗುತ್ತಿದೆ. |
| (ಉ) ಯಾವ ಯಾವ ಸ್ಮಾರಕಗಳನ್ನು ಸಂರಕ್ಷಿಸಲಾಗಿದೆ? | ಮೇಲಿನ ಉತ್ತರಗಳ ಹಿನ್ನೆಲೆಯಲ್ಲಿ ಪ್ರಸ್ತುತ ಉದ್ಭವಿಸುವುದಿಲ್ಲ |

**ಸಂಖ್ಯೆ: ಕೌಉಜೀಇ 68 ಉಜೀಪ್ರ 2021**

(ಡಾ|| ಅಶ್ವಥ್ ನಾರಾಯಣ .ಸಿ.ಎನ್)
ಉನ್ನತ ಶಿಕ್ಷಣ, ಐಟಿ-ಬಿಟಿ ವಿಜ್ಞಾನ ಮತ್ತು
ತಂತ್ರಜ್ಞಾನ, ವಿದ್ಯುನ್ಮಾನ ಮತ್ತು
ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು
ಜೀವನೋಪಾಯ ಸಚಿವರು.